# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1062
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 22.12.2021
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆಯ ಬಹುತೇಕ ಲೋಕೋಪಯೋಗಿ ಇಲಾಖೆಯ ರಸ್ತೆಗಳು ತೀರಾ ಹದಗೆಟ್ಟಿದ್ದು, ಸಾರ್ವಜನಿಕರು ಸಂಚರಿಸಲು ಭಾರೀ ಕಷ್ಟಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, ಬೆಳಗಾವಿ ಜಿಲ್ಲೆಯ ಲೋಕೋಪಯೋಗಿ ಇಲಾಖೆಯ ತೀರಾ ಹದಗೆಟ್ಟಿರುವ ರಸ್ತೆಗಳನ್ನು ದುರಸ್ತಿ ಮತ್ತು ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | (1) ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದಂತೆ ತೀರಾ ಹದಗೆಟ್ಟಿರುವ ರಸ್ತೆಗಳ ದುರಸ್ತಿಗಾಗಿ 2021-22ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ: 3054 ರಾಜ್ಯ ಹೆದ್ದಾರಿ ನಿರ್ವಹಣೆಯಡಿ 93 ಕಾಮಗಾರಿಗಳನ್ನು ರೂ.1125.54 ಲಕ್ಷಗಳ ಮೊತ್ತದಲ್ಲಿ ಹಾಗೂ 2826 ಕಿ.ಮೀ ಉದ್ದದ 398 ಕಾಮಗಾರಿಗಳ ರಸ್ತೆಯನ್ನು ಲೆಕ್ಕಶೀರ್ಷಿಕೆ: 3054-ಜಿಲ್ಲಾ ಮುಖ್ಯ ರಸ್ತೆ ನಿರ್ವಹಣೆ ಅಡಿಯಲ್ಲಿ ರೂ.564.50 ಲಕ್ಷಗಳ ಮೊತ್ತದಲ್ಲಿ ಕೈಕೊಳ್ಳಲಾಗಿದ್ದು, ಎಲ್ಲಾ ನಿರ್ವಹಣೆ ಕಾಮಗಾರಿಗಳು ಪ್ರಗತಿಯಲ್ಲಿವೆ.<br><br>(2) ಬೆಳಗಾವಿ ಜಿಲ್ಲೆಯ ಪ್ರಸಕ್ತ ಸಾಲಿನ ಅತೀವೃಷ್ಟಿಯಿಂದಾಗಿ ಹಾನಿಗೊಳಗಾದ 75 ಕಾಮಗಾರಿಗಳ ಒಟ್ಟು 53.00 ಕಿ.ಮೀ ರಸ್ತೆಗಳ ಪುನರ್ ನಿರ್ಮಾಣಕ್ಕಾಗಿ ರೂ.4805.00 ಲಕ್ಷಗಳ ಕ್ರಿಯಾ ಯೋಜನೆ ಅನುಮೋದನೆಗೊಂಡಿದ್ದು, 12 ಕಾಮಗಾರಿಗಳು ಪ್ರಗತಿಯಲ್ಲಿವೆ. ಹಾಗೂ ಬಾಕಿ ಕಾಮಗಾರಿಗಳು ಟೆಂಡರ್ ಪ್ರಕ್ರಿಯೆಲ್ಲಿವೆ.<br><br>(3) ಲೆಕ್ಕ ಶೀರ್ಷಿಕೆ 3054 ಹೆಚ್ಚುವರಿಯಾಗಿ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ನಿರ್ವಹಣೆ ಅಡಿ ರೂ.1445.00 ಲಕ್ಷಗಳ ಕ್ರಿಯಾ ಯೋಜನೆ ಅನುಮೋದನೆಗೊಂಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿವೆ. ಲೆಕ್ಕ ಶೀರ್ಷಿಕೆ 5054 ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಸುಧಾರಣೆಗಾಗಿ ಕ್ರಮವಾಗಿ ರೂ.600.00 ಮತ್ತು ರೂ.800.00 ಲಕ್ಷಗಳು ಹೀಗೆ ಒಟ್ಟು ರೂ.1400.00ಲಕ್ಷಗಳ ಕ್ರಿಯಾ ಯೋಜನೆ ಅನುಮೋದನೆಗೊಂಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿವೆ.<br><br>(4) ಬೆಳಗಾವಿ ಜಿಲ್ಲೆಯಲ್ಲಿ ಹಾನಿ ಯಾದ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಸುಧಾರಣೆಗಾಗಿ ಹೆಚ್ಚುವರಿಯಾಗಿ ರೂ.4470.00ಲಕ್ಷಗಳ ಅನುದಾನದ ಅಗತ್ಯವಿದ್ದು, ಅದರಂತೆ ಕ್ರಿಯಾ ಯೋಜನೆ ತಯಾರಿಸಿದ್ದು, ಅನುದಾನದ ಲಭ್ಯತೆಯನುಸಾರವಾಗಿ ರಸ್ತೆ ದುರಸ್ತಿ ಮತ್ತು ಪುನರ್ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲಾಗುವುದು.<br><br>(5) ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯಡಿ ಹಂತ-4 ಘಟ್ಟ-2 ರಡಿಯಲ್ಲಿ ರೂ.34,850.00 ಲಕ್ಷಗಳ ಅಂದಾಜು ಮೊತ್ತದಲ್ಲಿ |

| | ಪ್ರಶ್ನೆಗಳು | ಉತ್ತರಗಳು |
|---|---|---|
| | | ಬೆಳಗಾವಿ ಜಿಲ್ಲೆಯ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಡಿ.ಪಿ.ಆರ್ ತಯಾರಿಸಲಾಗುತ್ತಿದ್ದು, ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗುವುದು.<br><br>(6) ರಾಷ್ಟ್ರೀಯ ಹೆದ್ದಾರಿ ವಲಯಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ-548ಬಿ ಕಿ.ಮೀ 40.00 ರಿಂದ (ತೆಲಸಂಗ ಕ್ರಾಸ್) ದಿಂದ ಕಿ.ಮೀ 169.00 (ಗೋಟುರ) ಹಾಳಾದ ರಸ್ತೆಯನ್ನು ಅಭಿವೃದ್ಧಿಪಡಿಸಲು ಟೆಂಡರ್ ಕರೆದು ಗುತ್ತಿಗೆ ನೀಡುವ ಹಂತದಲ್ಲಿರುತ್ತದೆ. ಹಾಗೂ ಸದರಿ ರಸ್ತೆಯ ಕಿಮೀ 80.00 ರಿಂದ 169.00 ರವರೆಗಿನ ರಸ್ತೆಯನ್ನು ನಿಯತಕಾಲಿಕ ನವೀಕರಣ ಕಾಮಗಾರಿಗೆ ಪ್ರಾದೇಶಿಕ ಅಧಿಕಾರಿಗಳು, ಕೇಂದ್ರ ಭೂಸಾರಿಗೆ ಮಂತ್ರಾಲಯ, ಬೆಂಗಳೂರು ಇವರು ದಿನಾಂಕ:30.03.2021ರಂದು ಅಂದಾಜು ಮೊತ್ತ ರೂ.21.88 ಕೋಟಿಗಳಿಗೆ ಅನುಮೋದನೆ ನೀಡಿದ್ದು, ಕಾಮಗಾರಿಯನ್ನು ಶೀಘ್ರದಲ್ಲಿಯೇ ಪ್ರಾರಂಭಿಸಲಾಗುವದು. |
| ಇ) | ತೆಲಸಂಗ ಗ್ರಾಮದಿಂದ ಕನ್ನಾಳ ಮಾರ್ಗವಾಗಿ ಸಾವಳಗಿಗೆ ಸಂಪರ್ಕ ಕಲ್ಪಿಸುವ ಸುಮಾರು 10 ಕಿಮೀ ರಸ್ತೆಯ ಡಾಂಬರ್ ಕಿತ್ತು ಹೋಗಿ ಸಂಪೂರ್ಣ ಹದಗೆಟ್ಟಿರುವ ಈ ರಸ್ತೆಯನ್ನು ದುರಸ್ತಿ ಮತ್ತು ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ತೆಲಸಂಗ ಗ್ರಾಮದಿಂದ ಕನ್ನಾಳ ಮಾರ್ಗವಾಗಿ ಸಾವಳಗಿಗೆ ಸಂಪರ್ಕ ಕಲ್ಪಿಸುವ ರಸ್ತೆಯನ್ನು ವಾರ್ಷಿಕ ನಿರ್ವಹಣೆ ಅಡಿ ಈಗಾಗಲೇ ಡಾಂಬರೀಕರಣದಿಂದ ತಗ್ಗು ಗುಂಡಿಗಳನ್ನು ತುಂಬಿ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ ಹಾಗೂ ತೇಲಸಂಗ ಗ್ರಾಮದ ಹದ್ದಿಯಲ್ಲಿ ಅಗಲೀಕರಣಕ್ಕಾಗಿ 2020-21ನೇ ಸಾಲಿನಲ್ಲಿ ರೂ.300.00 ಲಕ್ಷಗಳ ಮೊತ್ತದ ಅನುದಾನ ಬಿಡುಗಡೆಯಾಗಿದ್ದು, ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| ಈ) | 2021-22ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ರಸ್ತೆ ಅಭಿವೃದ್ಧಿ ಮತ್ತು ದುರಸ್ತಿಗಾಗಿ ಸರ್ಕಾರದಿಂದ ಒದಗಿಸಲಾಗಿರುವ ಅನುದಾನವೆಷ್ಟು; ಅದರಲ್ಲಿ ಬಳಕೆಯಾಗಿರುವ ಅನುದಾನವೆಷ್ಟು; ಎಲ್ಲಿ ಯಾವ ಯಾವ ರಸ್ತೆಗಳನ್ನು ಅಭಿವೃದ್ಧಿಪಡಿಲಾಗಿದೆ? (ವಿವರ ಒದಗಿಸುವುದು) | ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳಿಗೆ ಸಂಬಂಧಿಸಿದಂತೆ **ವಿವರಗಳನ್ನು ಅನುಬಂಧದಲ್ಲಿ ನೀಡಿದೆ.**<br><br>ಮುಂದುವರೆದು, ರಾಷ್ಟ್ರೀಯ ಹೆದ್ದಾರಿ ವಲಯದ ವ್ಯಾಪ್ತಿ ಅಡಿ 2021-22ನೇ ಸಾಲಿನಲ್ಲಿ ಮಳೆ ಹಾನಿ ಯೋಜನೆಯಡಿ Improvement / Rising to Krishna Bridge Approches from Km.124.40 (Manjari) to Km 130.10 (Ankali) of NH-5488 Vijayapur-Sankeshwar in the State of Karnataka. ಕಾಮಗಾರಿಗೆ ರೂ.9.39 ಕೋಟಿಗಳಿಗೆ ಅನುಮೋದನೆಗಾಗಿ ದಿನಾಂಕ:24.09.2021 ರಂದು ಕೇಂದ್ರ ಭೂಸಾರಿಗೆ ಮಂತ್ರಾಲಯಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. |

ಲೋಇ 121 ಸಿಕ್ಯೂಎನ್ 2021(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

ಪ್ರಶ್ನೆ ಸಂಖ್ಯೆ: 1062ಕ್ಕೆ ಅನುಬಂಧ

2021-22 ನೇ ಸಾಲಿನಲ್ಲಿ 3054-ರಾಜ್ಯ ಹೆದ್ದಾರಿ ನಿರ್ವಹಣೆ ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 60 | 933.28 | 636.00 | 636.00 | 0.00 | 1814.00 km Road length considered for maintenance ( 93 works - under progress ) |
| 2 | ಚಿಕ್ಕೋಡಿ | 33 | 708.73 | 489.54 | 489.54 | 0.00 | |
| **Belagavi Dist Total** | | **93** | **1642.01** | **1125.54** | **1125.54** | **0.00** | |

2021-22 ನೇ ಸಾಲಿನಲ್ಲಿ 3054-ಜಿಲ್ಲಾ ಮುಖ್ಯ ರಸ್ತೆ ನಿರ್ವಹಣೆ ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 209 | 731.02 | 240.00 | 240.00 | 0.00 | 2826.00 km Road length considered for maintanance ( 398 works - under progress ) |
| 2 | ಚಿಕ್ಕೋಡಿ | 189 | 976.29 | 324.50 | 324.50 | 0.00 | |
| **Belagavi Dist Total** | | **398** | **1707.31** | **564.5** | **564.5** | **0.00** | |

2021-22 ನೇ ಸಾಲಿನಲ್ಲಿ ಉಂಟಾದ ಪ್ರವಾಹ- ಲೋಕೋಪಯೋಗಿ ಇಲಾಖೆ ಮೂಲಸೌಕರ್ಯ ಹಾನಿಯ ಪುನರ್ ನಿರ್ಮಾಣ ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 30 | 1905.00 | 1905.00 | 1905.00 | 0.00 | 53.54 km Road length considered for flood damage works (12 works - under progress 63 works -tender stage) |
| 2 | ಚಿಕ್ಕೋಡಿ | 45 | 2900.00 | 2900.00 | 2900.00 | 0.00 | |
| **Belagavi Dist Total** | | **75** | **4805.00** | **4805.00** | **4805.00** | **0.00** | |

2021-22 ನೇ ಸಾಲಿನಲ್ಲಿ 3054-ಜಿಲ್ಲಾ ಮುಖ್ಯ ರಸ್ತೆ ನಿರ್ವಹಣೆ ((ಹೆಚ್ಚುವರಿ) ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 0 | 0.00 | 0.00 | 0.00 | 0.00 | 3 works -tender stage |
| 2 | ಚಿಕ್ಕೋಡಿ | 3 | 425.00 | 425.00 | 425.00 | 0.00 | |
| **Belagavi Dist Total** | | **3** | **425** | **425** | **425** | **0.00** | |

2021-22 ನೇ ಸಾಲಿನಲ್ಲಿ 3054-ರಾಜ್ಯ ಹೆದ್ದಾರಿ ನಿರ್ವಹಣೆ (ಹೆಚ್ಚುವರಿ) ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 0 | 0.00 | 0.00 | 0.00 | 0.00 | 11 works - tender stage |
| 2 | ಚಿಕ್ಕೋಡಿ | 11 | 1020.00 | 1020.00 | 1020.00 | 0.00 | |
| **Belagavi Dist Total** | | **11** | **1020.00** | **1020.00** | **1020.00** | **0.00** | |

2021-22 ನೇ ಸಾಲಿನಲ್ಲಿ 5054-ರಾಜ್ಯ ಹೆದ್ದಾರಿ ಸುಧಾರಣೆ (ಹೆಚ್ಚುವರಿ) ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 0 | 0.00 | 0.00 | 0.00 | 0.00 | 1 works - tender stage |
| 2 | ಚಿಕ್ಕೋಡಿ | 1 | 600.00 | 600.00 | 600.00 | 0.00 | |
| **Belagavi Dist Total** | | **1** | **600.00** | **600.00** | **600.00** | **0.00** | |

2021-22 ನೇ ಸಾಲಿನಲ್ಲಿ 5054-ಜಿಲ್ಲಾ ಮುಖ್ಯ ರಸ್ತೆ ಸುಧಾರಣೆ (ಹೆಚ್ಚುವರಿ) ಕಾಮಗಾರಿಗಳು

| sl No | Divisions | No of Works | Estimated cost(In Lakhs) | Grant allocated (In Lakhs) | Grant utiliesed (In Lakhs) | Expenditure (In Lakhs) | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಳಗಾವಿ | 0 | 0.00 | 0.00 | 0.00 | 0.00 | 7works -tender stage |
| 2 | ಚಿಕ್ಕೋಡಿ | 7 | 800.00 | 800.00 | 800.00 | 0.00 | |
| **Belagavi Dist Total** | | **7** | **800.00** | **800.00** | **800.00** | **0.00** | |

ಲೋಇ 121 ಸಿಕ್ಯೂಎಸ್ 2021(ಇ)